# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 381

ಸದಸ್ಯರ ಹೆಸರು : ಶ್ರೀ ಕೆ. ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 11/12/2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಅಂಗನವಾಡಿಗಳ ಮೂಲಕ ಗರ್ಭಿಣಿ, ಬಾಣಂತಿಯರಿಗೆ ಪೌಷ್ಠಿಕ ಆಹಾರ ಧಾನ್ಯಗಳನ್ನು ಪೂರೈಸುವ ಸಂಸ್ಥೆಗಳು ಯಾವುವು; (ವಿವರ ಒದಗಿಸುವುದು) | ಸರ್ವೋಚ್ಛ ನ್ಯಾಯಾಲಯದ ನಿರ್ದೇಶನದಂತೆ ರಾಜ್ಯದಲ್ಲಿ ಸ್ಥಾಪಿಸಲಾಗಿರುವ 137 ಎಂ.ಎಸ್.ಪಿ.ಟಿ.ಸಿ. ಗಳು ಅಂಗನವಾಡಿಗಳ ಮೂಲಕ ಕೇಂದ್ರದ ಫಲಾನುಭವಿಗಳಿಗೆ, ಗರ್ಭಿಣಿ, ಬಾಣಂತಿಯರಿಗೆ ಪೌಷ್ಠಿಕ ಆಹಾರ ಧಾನ್ಯಗಳನ್ನು ಪೂರೈಸುತ್ತಿವೆ. |
| ಆ. | ಕಳೆದ 3 ವರ್ಷಗಳ ಅವಧಿಯಲ್ಲಿ ಪೂರೈಸಲಾದ ಆಹಾರ ಧಾನ್ಯಗಳು, ಒದಗಿಸಲಾದ ಅನುದಾನ, ವೆಚ್ಚ ಎಷ್ಟು; (ಪ್ರತ್ಯೇಕ ಮಾಹಿತಿಯನ್ನು ವರ್ಷವಾರು, ಜಿಲ್ಲಾವಾರು ಒದಗಿಸುವುದು) | ಅಂಗನವಾಡಿ ಕೇಂದ್ರಗಳಿಗೆ ಸರಬರಾಜು ಮಾಡುವ ಆಹಾರ ಧಾನ್ಯಗಳು ಜಿಲ್ಲೆಯಿಂದ ಜಿಲ್ಲೆಗೆ ವ್ಯತ್ಯಾಸವಾಗುತ್ತದೆ. ಸಾಮಾನ್ಯವಾಗಿ ರಾಜ್ಯದಲ್ಲಿ ಅಂಗನವಾಡಿ ಕೇಂದ್ರಗಳಿಗೆ ನ್ಯೂಟ್ರಿಮಿಕ್ಸ್, ಹೆಸರುಬೇಳೆ, ಶೇಂಗಾಬೀಜ, ಹೆಸರುಕಾಳು, ತೊಗರಿಬೇಳೆ, ಒಣಮೆಣಸಿನಕಾಯಿ, ಕಡಲೆಬೇಳೆ, ಬೆಲ್ಲ, ಸಕ್ಕರೆ, ಸಾಂಬಾರು ಪೌಡರ್, ಡಬಲ್ ಫಾರ್ಟಿಫೈಡ್ ಉಪ್ಪು, ಅಕ್ಕಿ, ಗೋಧಿ, ಎಣ್ಣೆ ಹಾಗೂ ಕೋಳಿಮೊಟ್ಟೆಯನ್ನು ಪೂರೈಸಲಾಗುತ್ತಿದೆ.<br><br>ಕಳೆದ 3 ವರ್ಷಗಳ ಅವಧಿಯಲ್ಲಿ ಒದಗಿಸಲಾದ ಅನುದಾನ, ವೆಚ್ಚದ ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಿದೆ. |

2/-

| | | |
|---|---|---|
| ಇ. | ಪೂರೈಕೆಯಾಗುತ್ತಿರುವ ಆಹಾರ ಧಾನ್ಯಗಳು ಕಲಬೆರಕೆ, ಸಮಯಕ್ಕೆ ಸರಿಯಾಗಿ ಪೂರೈಸುವಲ್ಲಿನ ವಿಳಂಬ, ಅವ್ಯವಹಾರಗಳನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೇ; ಹಾಗಿದ್ದಲ್ಲಿ ನ್ಯೂನತೆ ಸರಿಪಡಿಸಲು ಸಂಬಂಧಪಟ್ಟವರ ಮೇಲೆ ಕೈಗೊಂಡ ಕ್ರಮಗಳೇನು? (ಪ್ರತ್ಯೇಕ ಸಂಪೂರ್ಣ ಮಾಹಿತಿ ಒದಗಿಸುವುದು.) | ಆಹಾರ ಮತ್ತು ಸುರಕ್ಷತಾ ಆಯುಕ್ತಾಲಯದ ವಿಭಾಗ ಮಟ್ಟದ ಆಹಾರ ವಿಶ್ಲೇಷಣಾ ಪರೀಕ್ಷಾಲಯದಿಂದ ಆಹಾರ ಪದಾರ್ಥಗಳನ್ನು ವಿಶ್ಲೇಷಣೆಗೆ ಒಳಪಡಿಸಿ ತದನಂತರವೇ ಅಂಗನವಾಡಿ ಕೇಂದ್ರದ ಫಲಾನುಭವಿಗಳಿಗೆ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು ವಿತರಿಸಲಾಗುತ್ತಿದೆ.<br><br>ಪ್ರತಿ ಅಂಗನವಾಡಿ ಕೇಂದ್ರದ ವ್ಯಾಪ್ತಿಯಲ್ಲಿ ರಚಿಸಲಾದ ಬಾಲವಿಕಾಸ ಸಮಿತಿಗಳ ಅಧ್ಯಕ್ಷರು / ಸದಸ್ಯರುಗಳು ಫಲಾನುಭವಿಗಳ ಮನೆಗಳಿಗೆ ಭೇಟಿ ನೀಡಿ ಅಂಗನವಾಡಿ ಕೇಂದ್ರಗಳಿಂದ ಆಹಾರಧಾನ್ಯ, ಹಾಲಿನಪುಡಿ ಮತ್ತು ಮೊಟ್ಟೆಗಳನ್ನು ನೀಡಿರುವ ಬಗ್ಗೆ ಖಚಿತಪಡಿಸಿಕೊಳ್ಳಲು ಕ್ರಮವಹಿಸಲಾಗಿದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 235 ಐಸಿಡಿ 2020

ಅನುಬಂಧ

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕೆ. ಗೋವಿಂದರಾಜ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 381

ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮ ಲೆಕ್ಕಶೀರ್ಷಿಕೆ:2235-00-101-0-61 (ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಜಿಲ್ಲೆ | 2017-18 | | 2018-19 | | 2019-20 | |
|---|---|---|---|---|---|---|---|
| | | ನಿಗದಿಪಡಿಸಿದ ಅನುದಾನ | ವೆಚ್ಚ | ನಿಗದಿಪಡಿಸಿದ ಅನುದಾನ | ವೆಚ್ಚ | ನಿಗದಿಪಡಿಸಿದ ಅನುದಾನ | ವೆಚ್ಚ |
| 1 | ಬಾಗಲಕೋಟೆ | 5775.76 | 6263.35 | 9059.76 | 7262.39 | 9090.00 | 3294.22 |
| 2 | ಬೆಂಗಳೂರು (ಗ್ರಾ) | 2171.16 | 2454.50 | 3493.51 | 1989.70 | 4760.00 | 1204.91 |
| 3 | ರಾಮನಗರ | 1798.72 | 1805.58 | 2973.06 | 2231.36 | 2982.00 | 931.61 |
| 4 | ಬೆಂಗಳೂರು (ನ) | 6898.98 | 6589.76 | 10986.40 | 6903.27 | 8120.00 | 3189.24 |
| 5 | ಬೆಳಗಾಂ | 13940.01 | 16018.64 | 21309.88 | 16003.93 | 21380.00 | 6964.13 |
| 6 | ಬಳ್ಳಾರಿ | 7912.14 | 8754.38 | 12569.71 | 8726.39 | 13474.00 | 4622.68 |
| 7 | ಬೀದರ್ | 4828.20 | 4953.16 | 7740.33 | 4247.51 | 7766.00 | 2581.28 |
| 8 | ಬಿಜಾಪುರ | 6421.07 | 7277.43 | 10782.78 | 7735.26 | 10818.00 | 3773.39 |
| 9 | ಚಾಮರಾಜನಗರ | 2288.48 | 2185.21 | 3541.00 | 2239.37 | 3552.00 | 1157.28 |
| 10 | ಚಿಕ್ಕಮಗಳೂರು | 2326.33 | 2231.31 | 3496.25 | 2202.51 | 3508.00 | 924.86 |
| 11 | ಚಿತ್ರದುರ್ಗ | 3866.74 | 4378.98 | 6200.85 | 4673.50 | 6221.00 | 2826.99 |
| 12 | ದಕ್ಷಿಣ ಕನ್ನಡ | 3720.53 | 3520.33 | 5576.29 | 3402.43 | 5594.00 | 1745.47 |
| 13 | ದಾವಣಗೆರೆ | 4622.50 | 4745.20 | 7292.00 | 5328.71 | 6587.00 | 2500.66 |
| 14 | ಧಾರವಾಡ | 4642.46 | 4632.42 | 7184.25 | 4625.73 | 7208.00 | 2136.74 |
| 15 | ಗದಗ | 2871.51 | 3222.25 | 4542.66 | 3420.84 | 4559.00 | 1733.97 |
| 16 | ಕಲಬುರಗಿ | 9861.48 | 9456.08 | 13304.75 | 10899.91 | 13350.00 | 4529.45 |
| 17 | ಯಾದಗಿರಿ | 4437.46 | 5282.76 | 6653.76 | 5780.21 | 6676.00 | 2659.48 |
| 18 | ಹಾಸನ | 3005.92 | 2776.51 | 4513.44 | 2806.44 | 4528.00 | 1554.93 |
| 19 | ಹಾವೇರಿ | 4490.91 | 4995.77 | 6869.24 | 4943.43 | 6892.00 | 2584.63 |
| 20 | ಕೊಡಗು | 1224.40 | 993.34 | 1724.84 | 935.54 | 1730.00 | 373.95 |
| 21 | ಕೋಲಾರ | 4078.27 | 2623.18 | 6672.92 | 5015.78 | 6694.00 | 1979.60 |
| 22 | ಚಿಕ್ಕಬಳ್ಳಾಪುರ | 2735.57 | 2695.71 | 4573.71 | 3642.92 | 4590.00 | 1711.32 |
| 23 | ಕೊಪ್ಪಳ | 5343.93 | 4885.17 | 8124.84 | 7503.52 | 8152.00 | 2691.53 |
| 24 | ಮಂಡ್ಯ | 3261.64 | 3252.68 | 5072.25 | 3610.37 | 5088.00 | 1850.42 |
| 25 | ಮೈಸೂರು | 4832.87 | 4935.91 | 7656.32 | 5835.42 | 7681.00 | 2829.70 |
| 26 | ರಾಯಚೂರು | 7979.56 | 7691.58 | 11596.35 | 8850.88 | 12440.00 | 4587.45 |
| 27 | ಶಿವಮೊಗ್ಗ | 3510.54 | 2763.70 | 5388.19 | 4656.15 | 5405.00 | 2222.03 |
| 28 | ತುಮಕೂರು | 5089.76 | 5597.65 | 7721.16 | 5545.10 | 7747.00 | 2946.58 |
| 29 | ಉಡುಪಿ | 1982.67 | 1745.14 | 3050.66 | 1878.09 | 3061.00 | 973.26 |
| 30 | ಉತ್ತರ ಕನ್ನಡ | 3635.43 | 3301.91 | 5370.84 | 3591.02 | 5389.00 | 1911.94 |
| | ಒಟ್ಟು | **139555.00** | **142029.59** | **215042.00** | **156487.68** | **215042.00** | **74993.70** |